## 79. ಅನ್ನಾಝಿಆತ್

ಸೂ. 46 ರು. 2

سُورَةُ النّٰزِعٰتِ مَكِّيَّةٌ

(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಮುಳುಗಿ ಎಳೆಯುವವರಾಣೆ- وَالنّٰزِعٰتِ غَرْقًا ۝١

2. ಮತ್ತು ಮೃದುವಾಗಿ ತೆಗೆದೊಯ್ಯುವವರಾಣೆ-[1] وَّالنّٰشِطٰتِ نَشْطًا ۝٢

3. (ವಿಶ್ವದಲ್ಲಿ) ವೇಗವಾಗಿ ತೇಲುತ್ತಿರುವವರಾಣೆ-[2] وَّالسّٰبِحٰتِ سَبْحًا ۝٣

4. ಮತ್ತು (ಆಜ್ಞಾಪಾಲನೆಗಾಗಿ) ಸ್ಪರ್ಧಿಸುವವರಾಣೆ-[3] فَالسّٰبِقٰتِ سَبْقًا ۝٤

5. ಮತ್ತು (ದೇವಾಜ್ಞೆಗಳಿಗನುಸಾರವಾಗಿ) ವ್ಯವಹಾರಗಳನ್ನು ನೋಡಿ ಕೊಳ್ಳುವವರಾಣೆ-[4] فَالْمُدَبِّرٰتِ اَمْرًا ۝٥

6. ಭೂಕಂಪದ ಆಘಾತವು ನಡುಕವನ್ನುಂಟು ಮಾಡುವಂದು- يَوْمَ تَرْجُفُ الرَّاجِفَةُ ۝٦

7. ಮತ್ತು ಅದರ ಬೆನ್ನಿಗೇ ಇನ್ನೊಂದು ಆಘಾತವು ಉಂಟಾಗುವಂದು. تَتْبَعُهَا الرَّادِفَةُ ۝٧

8. ಕೆಲವು ಹೃದಯಗಳು ಅಂದು ಭಯದಿಂದ ನಡುಗುತ್ತಿರುವುವು- قُلُوْبٌ يَّوْمَئِذٍ وَّاجِفَةٌ ۝٨

9. ಅವರ ಕಣ್ಣುಗಳು ಭಯಗ್ರಸ್ತವಾಗಿರುವುವು. اَبْصَارُهَا خَاشِعَةٌ ۝٩

10. ಇವರು ಕೇಳುತ್ತಾರೆ, ನಾವು ಪುನಃ (ಪೂರ್ವಸ್ಥಿತಿಗೆ) ಮರಳಿಸಲ್ಪಡುವೆವೇ? يَقُوْلُوْنَ ءَاِنَّا لَمَرْدُوْدُوْنَ فِي الْحَافِرَةِ ۝١٠

1. ಅರ್ಥಾತ್- ಮರಣದ ವೇಳೆ ಮಾನವನ ಪ್ರಾಣವನ್ನು ಅವನ ದೇಹದ ಅಂತರಾಳದವರೆಗಿಳಿದು ಪ್ರತಿಯೊಂದು ನಾಡಿಯಿಂದ ಅದನ್ನು ಎಳೆದು ತೆಗೆಯುವ ದೇವಚರರು.
2. ಅರ್ಥಾತ್- ವಾತಾವರಣದಲ್ಲಿ ತೇಲುತ್ತಿರುವಂತೆ ಅವರು ಅಲ್ಲಾಹನ ಆಜ್ಞಾನುಪಾಲನೆಯಲ್ಲಿ ಧೃತಗತಿಯಲ್ಲಿ ಸಕ್ರಿಯರಾಗಿರುವರು.
3. ಸ್ಪರ್ಧಿಸುವುದೆಂದರೆ ದೇವಾಜ್ಞೆಯ ಸೂಚನೆ ಸಿಗುತ್ತಲೇ ಅವರ ಪೈಕಿ ಪ್ರತಿಯೊಬ್ಬನೂ ಆಜ್ಞಾಪಾಲನೆಗೆ ಧಾವಿಸುತ್ತಾನೆ.
4. ಇವರು ಅಲ್ಲಾಹನ ಆಜ್ಞೆಯಂತೆ ಲೋಕದ ಸಮಸ್ತ ವ್ಯವಸ್ಥೆಯನ್ನು ತಮ್ಮ ಕರಗಳಿಂದ ನಡೆಸುತ್ತಿರುವ ನಿಸರ್ಗ ಸಾಮ್ರಾಜ್ಯದ ಕಾರ್ಯಕರ್ತರಾಗಿದ್ದಾರೆ.

| | |
|---|---|
| 11. ಟೊಳ್ಳಾದ, ಕೊಳೆತ ಎಲುಬುಗಳಾಗಿ ಬಿಟ್ಟ ಬಳಿಕವೂ. | ءَاِذَا كُنَّا عِظَامًا نَّخِرَةً ﴿١١﴾ |
| 12. "ಈ ಮರಳುವಿಕೆಯಂತು ಬಹಳ ನಷ್ಟದಾಯಕವಾಗಿರುವುದು" ಎನ್ನುತ್ತಾರೆ.[5] | قَالُوْا تِلْكَ اِذًا كَرَّةٌ خَاسِرَةٌ ﴿١٢﴾ |
| 13. ನಿಜವಾಗಿ ಇದು ಒಂದು ಘನ ಘರ್ಜನೆಯಾಗಿರುವುದು- | فَاِنَّمَا هِيَ زَجْرَةٌ وَّاحِدَةٌ ﴿١٣﴾ |
| 14. ಮತ್ತು ಹಠಾತ್ತನೆ ಇವರು ಒಂದು ತೆರೆದ ಮೈದಾನದಲ್ಲಿ ಹಾಜರಿರುವರು. | فَاِذَا هُمْ بِالسَّاهِرَةِ ﴿١٤﴾ |
| 15. ನಿಮಗೆ ಮೂಸಾರ ವೃತ್ತಾಂತ ತಲುಪಿದೆಯೇ? | هَلْ اَتٰىكَ حَدِيْثُ مُوْسٰى ﴿١٥﴾ |
| 16. ಅವರ ಪ್ರಭು ಅವರನ್ನು 'ತುವಾ'ದ ಪವಿತ್ರ ಕಣಿವೆಯಲ್ಲಿ ಕರೆದಾಗ. | اِذْ نَادٰىهُ رَبُّهٗ بِالْوَادِ الْمُقَدَّسِ طُوًى ﴿١٦﴾ |
| 17. "ಫಿರ್‌ಔನನ ಬಳಿಗೆ ಹೋಗಿರಿ. ಅವನು ವಿದ್ರೋಹಿಯಾಗಿ ಬಿಟ್ಟಿದ್ದಾನೆ. | اِذْهَبْ اِلٰى فِرْعَوْنَ اِنَّهٗ طَغٰى ﴿١٧﴾ |
| 18. ಅವನೊಡನೆ ಕೇಳಿರಿ- "ನೀನು ಪರಿಶುದ್ಧನಾಗಲು ಸಿದ್ಧನಾಗಿರುವೆಯಾ? | فَقُلْ هَلْ لَّكَ اِلٰٓى اَنْ تَزَكّٰى ﴿١٨﴾ |
| 19. ಮತ್ತು ನಾನು ನಿನ್ನ ಪ್ರಭುವಿನ ಕಡೆಗೆ ನಿನಗೆ ಮಾರ್ಗದರ್ಶನ ಮಾಡಿದರೆ, (ಅವನ) ಭಯ ನಿನ್ನಲ್ಲಿ ಉಂಟಾದೀತೇ?" | وَاَهْدِيَكَ اِلٰى رَبِّكَ فَتَخْشٰى ﴿١٩﴾ |
| 20. ತರುವಾಯ ಮೂಸಾರು (ಫಿರ್‌ಔನನ ಬಳಿಗೆ ಹೋಗಿ) ಅವನಿಗೆ ದೊಡ್ಡ ನಿದರ್ಶನವನ್ನು[6] ತೋರಿಸಿದರು. | فَاَرٰىهُ الْاٰيَةَ الْكُبْرٰى ﴿٢٠﴾ |
| 21. ಆದರೆ, ಅವನು ಸುಳ್ಳಾಗಿಸಿ ಬಿಟ್ಟನು ಮತ್ತು ಧಿಕ್ಕರಿಸಿದನು. | فَكَذَّبَ وَعَصٰى ﴿٢١﴾ |
| 22. ತರುವಾಯ ಕುತಂತ್ರಗಳನ್ನೆಸಗಲಿಕ್ಕಾಗಿ ಮರಳಿದನು. | ثُمَّ اَدْبَرَ يَسْعٰى ﴿٢٢﴾ |

5. ಅರ್ಥಾತ್- ಅವರಿಗೆ ಉತ್ತರವೀಯುತ್ತಾ 'ಹೌದು! ಹಾಗೆಯೇ ಸಂಭವಿಸುವುದು' ಎಂದು ಹೇಳಲಾದಾಗ ಅವರು ಅಪಹಾಸ್ಯ ಮಾಡುತ್ತಾ ಪರಸ್ಪರ ಹೀಗೆನ್ನತೊಡಗಿದರು, "ಮಿತ್ರರೇ! ನಿಜವಾಗಿಯೂ ನಾವೆಲ್ಲ ಪುನಃ ಜೀವಂತ ಸ್ಥಿತಿಗೆ ಮರಳಲಿಕ್ಕಿದೆಯೆಂದಾದರೆ ನಮ್ಮ ಪಾಲಿಗೆ ಅದು ಕಷ್ಟ ಕಾಲವೇ ಸರಿ."

6. ದೊಡ್ಡ ನಿದರ್ಶನವೆಂದರೆ ಲಾಠಿಯು ಹೆಬ್ಬಾವಾಗಿ ಮಾರ್ಪಡುವುದು. ಕುರ್‌ಆನಿನಲ್ಲಿ ಅನೇಕ ಕಡೆ ಈ ಬಗ್ಗೆ ಪ್ರಸ್ತಾಪಿಸಲಾಗಿದೆ.

23. ಮತ್ತು ಜನರನ್ನು ಒಟ್ಟುಗೂಡಿಸಿದನು. — فَحَشَرَ فَنَادٰى ﴿٢٣﴾

24. 'ನಾನು ನಿಮ್ಮ ಮಹಾಪ್ರಭು' ಎಂದು ಸಾರಿದನು. — فَقَالَ اَنَا رَبُّكُمُ الْاَعْلٰى ﴿٢٤﴾

25. ಕೊನೆಗೆ ಅಲ್ಲಾಹನು ಅವನನ್ನು ಪರಲೋಕದ ಹಾಗೂ ಈ ಲೋಕದ ಯಾತನೆಯಲ್ಲಿ ಹಿಡಿದು ಬಿಟ್ಟನು. — فَاَخَذَهُ اللّٰهُ نَكَالَ الْاٰخِرَةِ وَالْاُوْلٰى ﴿٢٥﴾

26. ವಾಸ್ತವದಲ್ಲಿ ಭಯಪಡುವ ಪ್ರತಿಯೊಬ್ಬನಿಗೂ ಇದರಲ್ಲಿ ಪಾಠವಿದೆ.[7] — اِنَّ فِيْ ذٰلِكَ لَعِبْرَةً لِّمَنْ يَّخْشٰى ﴿٢٦﴾

27. ನಿಮ್ಮನ್ನು ಸೃಷ್ಟಿಸುವ ಕಾರ್ಯ ಹೆಚ್ಚು ಪ್ರಯಾಸಕರವೋ ಅಥವಾ ಆಕಾಶವನ್ನೋ? ಅಲ್ಲಾಹನು ಅದನ್ನು ನಿರ್ಮಿಸಿದನು. — ءَاَنْتُمْ اَشَدُّ خَلْقًا اَمِ السَّمَآءُ ؕ بَنٰىهَا ﴿٢٧﴾

28. ಅದರ ಮಾಡನ್ನು ಬಹಳಷ್ಟು ಎತ್ತರಕ್ಕೆ ಏರಿಸಿದನು. ತರುವಾಯ ಅದನ್ನು ಸಂತುಲಿತಗೊಳಿಸಿದನು- — رَفَعَ سَمْكَهَا فَسَوّٰىهَا ﴿٢٨﴾

29. ಮತ್ತು ಅದರ ರಾತ್ರೆಯನ್ನು ಹೊದಿಸಿದನು ಮತ್ತು ಅದರ ಹಗಲನ್ನು ಹೊರತೆಗೆದನು. — وَاَغْطَشَ لَيْلَهَا وَاَخْرَجَ ضُحٰىهَا ﴿٢٩﴾

30. ಅನಂತರ ಅವನು ಭೂಮಿಯನ್ನು ಹಾಸಿದನು. — وَالْاَرْضَ بَعْدَ ذٰلِكَ دَحٰىهَا ﴿٣٠﴾

31. ಅದರೊಳಗಿಂದ ಅದರ ನೀರನ್ನೂ ಮೇವನ್ನೂ ಹೊರ ತೆಗೆದನು- — اَخْرَجَ مِنْهَا مَآءَهَا وَمَرْعٰىهَا ﴿٣١﴾

32. ಮತ್ತು ಪರ್ವತಗಳನ್ನು ಅದರಲ್ಲಿ ನಾಟಿ ಬಿಟ್ಟನು- — وَالْجِبَالَ اَرْسٰىهَا ﴿٣٢﴾

33. (ಇವೆಲ್ಲ) ನಿಮಗೂ ನಿಮ್ಮ ಜಾನುವಾರುಗಳಿಗೂ ಜೀವನ ಸಾಧನಗಳ ರೂಪದಲ್ಲಿ. — مَتَاعًا لَّكُمْ وَلِاَنْعَامِكُمْ ﴿٣٣﴾

34. ಮುಂದೆ ಆ ಮಹಾ ಕೋಲಾಹಲವೆದ್ದಾಗ[8], — فَاِذَا جَآءَتِ الطَّآمَّةُ الْكُبْرٰى ﴿٣٤﴾

35. ಅಂದು ಮಾನವನು ತಾನು ಮಾಡಿದುದೆಲ್ಲವನ್ನೂ ಸ್ಮರಿಸುವನು- — يَوْمَ يَتَذَكَّرُ الْاِنْسَانُ مَا سَعٰى ﴿٣٥﴾

36. ಮತ್ತು ಪ್ರತಿಯೊಬ್ಬ ನೋಡುವವನ ಮುಂದೆ ನರಕವು ತೆರೆ ದಿಡಲ್ಪಡುವುದು. — وَبُرِّزَتِ الْجَحِيْمُ لِمَنْ يَّرٰى ﴿٣٦﴾

---

7. ಅರ್ಥಾತ್- ಪ್ರವಾದಿಯನ್ನು ಸುಳ್ಳಾಗಿಸಿದುದರಿಂದಾಗಿ ಫಿರ್‌ಔನ್ ಎದುರಿಸಿದ ಪರಿಣಾಮದ ಬಗ್ಗೆ ಭಯವಿರಿಸಿಕೊಂಡವರಿಗೆ.
8. ಅರ್ಥಾತ್ ಪುನರುತ್ಥಾನ ದಿನ.

| | |
|---|---|
| 37. ವಿದ್ರೋಹವೆಸಗಿದವನಿಗೆ- | فَاَمَّا مَنْ طَغٰى |
| 38. ಹಾಗೂ ಇಹಲೋಕ ಜೀವನಕ್ಕೆ ಆದ್ಯತೆ ಕೊಟ್ಟವನಿಗೆ- | وَاٰثَرَ الْحَيٰوةَ الدُّنْيَا |
| 39. ನರಕವೇ ನಿವಾಸವಾಗುವುದು. | فَاِنَّ الْجَحِيْمَ هِيَ الْمَاْوٰى |
| 40. ತನ್ನ ಪ್ರಭುವಿನ ಮುಂದೆ ಹಾಜರಾಗಲಿಕ್ಕಿದೆಯೆಂದು ಭಯಪಡುತ್ತಿದ್ದವನಿಗೆ ಮತ್ತು ತನ್ನ ಚಿತ್ತದ ದುಷ್ಟ ಅಪೇಕ್ಷೆಗಳಿಂದ ತನ್ನನ್ನು ತಡೆದಿಟ್ಟುಕೊಂಡಿದ್ದವನಿಗೆ- | وَاَمَّا مَنْ خَافَ مَقَامَ رَبِّهٖ وَنَهَى النَّفْسَ عَنِ الْهَوٰى |
| 41. ಸ್ವರ್ಗವೇ ನಿವಾಸವಾಗುವುದು. | فَاِنَّ الْجَنَّةَ هِيَ الْمَاْوٰى |
| 42. "ಆ ಘಳಿಗೆ ಬಂದೆರಗುವುದಾದರೂ ಯಾವಾಗ?" ಎಂದು ಇವರು ನಿಮ್ಮೊಡನೆ ಕೇಳುತ್ತಾರೆ. | يَسْـَٔلُوْنَكَ عَنِ السَّاعَةِ اَيَّانَ مُرْسٰىهَا |
| 43. ಅದರ ಸಮಯವನ್ನು ತಿಳಿಸುವ ಕೆಲಸ ನಿಮಗೆಲ್ಲಿದೆ? | فِيْمَ اَنْتَ مِنْ ذِكْرٰىهَا |
| 44. ಅದರ ಜ್ಞಾನವಂತು ನಿಮ್ಮ ಪ್ರಭುವಿಗೇ ಸೀಮಿತಗೊಂಡಿದೆ. | اِلٰى رَبِّكَ مُنْتَهٰىهَا |
| 45. ನೀವಂತು ಅದನ್ನು ಭಯಪಡುವ ಪ್ರತಿಯೊಬ್ಬನಿಗೆ ಕೇವಲ ಎಚ್ಚರಿಕೆ ನೀಡುವವರಾಗಿದ್ದೀರಿ. | اِنَّمَآ اَنْتَ مُنْذِرُ مَنْ يَّخْشٰىهَا |
| 46. ಇವರು ಅದನ್ನು ಕಣ್ಣಾರೆ ಕಂಡುಕೊಳ್ಳುವ ದಿನ ತಾವು (ಇಹ ಲೋಕದಲ್ಲಿ ಅಥವಾ ಮೃತಾವಸ್ಥೆಯಲ್ಲಿ) ಕೇವಲ ಒಂದು ಮುಂಜಾನೆ ಅಥವಾ ಸಂಜೆ ಮಾತ್ರ ತಂಗಿದ್ದೆವೆಂದು ಇವರಿಗೆ ಭಾಸವಾಗುವುದು. | كَاَنَّهُمْ يَوْمَ يَرَوْنَهَا لَمْ يَلْبَثُوْٓا اِلَّا عَشِيَّةً اَوْ ضُحٰىهَا |